


# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 15-03-2021 ಪ್ರಶ್ನೆ ಸಂಖ್ಯೆ : 1046(1296)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಕೆ. ಎ. ತಿಪ್ಪೇಸ್ವಾಮಿ(ನಾಮನಿರ್ದೇಶನ ಹೊಂದಿದವರು)

ಉತ್ತರ ನೀಡಬೇಕಾದ ದಿನಾಂಕ : 15-03-2021

ಉತ್ತರಿಸುವ ಸಚಿವರು: ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

ವಿಷಯ : ಶಿಕ್ಷಣ ಕ್ಷೇತ್ರದ ಮಹತ್ವಾಕಾಂಕ್ಷೆ ಯೋಜನೆಗಳಿಗೆ ಅನುದಾನ ಕೊರತೆ ಬಗ್ಗೆ

(ಅ) ಕೇಂದ್ರ ಸರ್ಕಾರದ 2021-22ನೇ ಸಾಲಿನ ಆಯವ್ಯಯದಲ್ಲಿ "ಸಮಗ್ರ ಶಿಕ್ಷಣ ಅಭಿಯಾನ" ಅಡಿ ಒದಗಿಸಿರುವ ಅನುದಾನವು ಕಳೆದ ವರ್ಷಕ್ಕಿಂತ ಬಹಳಷ್ಟು ಕಡಿತಗೊಳಿಸಿರುವುದು ರಾಜ್ಯ ಸರ್ಕಾರದ ಗಮನಕ್ಕೆ ಬಂದಿದೆಯೇ; (ಸಂಪೂರ್ಣ ವಿವರ ನೀಡುವುದು)

(ಆ) ಅದರಂತೆ, ಕೇಂದ್ರ ಸರ್ಕಾರ ಪ್ರಸಕ್ತ ಆಯವ್ಯಯದಲ್ಲಿ : "ರಾಷ್ಟ್ರೀಯ ಯೋಜನೆ-ಹೆಣ್ಣು ಮಗುವಿನ ಹೈಸ್ಕೂಲ್ ವಿದ್ಯಾಭ್ಯಾಸದ ಉತ್ತೇಜನ" ಅಡಿಯಲ್ಲಿ ಸಹ ಭಾರಿ ಪ್ರಮಾಣದಲ್ಲಿ ಅನುದಾನ ಕಡಿತಗೊಳಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಇ) ಈ ರೀತಿ ಆಯವ್ಯಯದಲ್ಲಿ ಕೊರತೆ ಉಂಟು ಮಾಡುವ ಮುನ್ನ ಕೇಂದ್ರ-ರಾಜ್ಯ ಸರ್ಕಾರಗಳು ಯಾವು ದರೂ ಸಮೀಕ್ಷೆ/ಗಣತಿ ಕೈಗೊಂಡಿದೆಯೇ; (ವಿವರ ನೀಡುವುದು)

(ಈ) ಹಾಗಿದ್ದಲ್ಲಿ, ಈ ಉಭಯ ಯೋಜನೆಗಳ ಅಡಿ ಕೇಂದ್ರ ಸರ್ಕಾರದಿಂದ ನೀಡುವ ಖೋತಾ ಆರ್ಥಿಕ ನೆರವು ನೀಗಿಸಲು ರಾಜ್ಯ ಸರ್ಕಾರ ಪ್ರಸಕ್ತ ಆಯವ್ಯಯದಲ್ಲಿ ಅಗತ್ಯವಿರುವ ಅನುದಾನ ಒದಗಿಸಿ, ಮೇಲ್ಕಂಡ ಮಹತ್ವಾಕಾಂಕ್ಷೆ ಯೋಜನೆಗಳನ್ನು ಮುನ್ನಡೆಸುವುದೇ? (ವಿವರ ನೀಡುವುದು)